ಡಾ|| ದೇವರಕೊಂಡಾರೆಡ್ಡಿ *

# ಎರಿಗಲ್ವಾಡಿ ಚೋಳರ ಕೂರಾಕಲಪಲ್ಲಿ ತಾಮ್ರಶಾಸನ

ಈ ಶಾಸನವು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಕೂರಾಕಲಪಲ್ಲಿಯ ಚೌಧರಿ ಎಂಬುವವರ ವಶದಲ್ಲಿದ್ದು ಅದರ ಪೆನ್ಸಿಲ್ ಪ್ರತಿಯನ್ನು ಡಾ|| ಆರ್ ಶೇಷಶಾಸ್ತ್ರಿಯವರು ಪಡೆದಿದ್ದರು. ಈ ಶಾಸನ ಐದು ಹಲಗೆಗಳನ್ನು ಹೊಂದಿದ್ದು ಇನ್ನೊಂದು ಹಲಗೆ ಕಳೆದಿರುವಂತೆ ತಿಳಿಯುತ್ತದೆ. ಪ್ರತಿ ಹಲಗೆಯೂ ನಾಲ್ಕು ಸಾಲುಗಳನ್ನು ಹೊಂದಿದೆ. ಶಾಸನದ ಲಿಪಿಗಳು ಸ್ವಲ್ಪ ದಪ್ಪದಾಗಿದ್ದು, ಕ, ರ, ಮ, ಚ, ಪ, ಲ ಮುಂತಾದ ಅಕ್ಷರಗಳ ಬೆಳವಣಿಗೆಯನ್ನು ಮತ್ತು ತಲೆಕಟ್ಟುಗಳನ್ನು ಗಮನಿಸಿದಾಗ ೧೦ ನೆಯ ಶತಮಾನದ ಮಧ್ಯ ಭಾಗಕ್ಕೆ ಸೇರಬಹುದಾದ ಕನ್ನಡಲಿಪಿಯಲ್ಲಿದೆ.

ಶಾಸನದ ಭಾಷೆ ಮತ್ತು ಲಿಪಿ ಕನ್ನಡ, 'ಱ' ಕಾರದ ಪ್ರಯೋಗವಿದೆ. ಶಾಸನವು ಗದ್ಯದಲ್ಲಿದ್ದು ಈ ಪ್ರದೇಶದ ಶಾಸನಗಳಲ್ಲಿ ಕಾಣಬರುವ 'ದೊಡ್ಡ' ಎಂಬ ಪ್ರಯೋಗ ಕಾಣಬರುತ್ತದೆ. ಉದಾಹರಣೆಗೆ ನಾಗೆಯದೊಡ್ಡ, ಪ್ರಭುದೊಡ್ಡ ಮುಂತಾದವು. ಶಾಸನದ ತುಂಬ ಅರಸರ, ಸಾಕ್ಷಿಗಳ ಹೆಸರೇ ತುಂಬಿದೆ.

ಶಾಸನದಲ್ಲಿ ಒಂದು ಹಲಗೆ ಕಳೆದಿರುವುದರಿಂದ ದಾನ ನೀಡಿದ ರಾಜನ ಮತ್ತಿತರ ವಿವರಗಳು ದೊರೆಯುುವುದಿಲ್ಲ. ೪ನೆಯ ಹಲಗೆಯಲ್ಲಿ 'ಚೋಳ ಮುತ್ತರಸ ಕೊಟ್ಟದತ್ತಿ, ಎರಿಗಲ್ವಡಿಯೊಳಗಣ ಕೊಳ್ಳೂರಪ್ಪಡೆದತ ಕಭ್ಯಾರ್ವರ ಸುಕ್ಕೆಱಿಯ ಬ್ರಹ್ಮದೇಯ ಪಡೆದೊ' ಎಂದಿರುವುದರಿಂದ ಈ ಶಾಸನದ ಅರಸ ಚೋಳಮುತ್ತರಸ, ದಾನವನು ಪಡೆದವನು ಸುಕ್ಕೆಱಿಯ ಎಂಬ ಬ್ರಾಹ್ಮಣ, ದಾನ ಪಡೆದ ಗ್ರಾಮ ಕೊಳ್ಳೂರು ಎಂಬ ವಿವರಗಳು ತಿಳಿಯುತ್ತವೆ.

ಈ ಶಾಸನದ ಚೋಳ ಅರಸರ ವಂಶಾವಳಿ ಹೇಳುವಾಗ ಇವರನ್ನು ಉರೆಯೂರು ಮೂಲದವರೆಂದು ಕರೆದಿರುತ್ತಾರೆ. ವಂಶಾವಳಿಯಲ್ಲಿ ವೊದಲನೆಯವನು

ಅರ್ಕ್ಕ – ಕರಾಪಟ್ಟ – ಪುನ್ಯವಲ್ಲಭ–ಸಿರಿರಾಮ–ಚೋಳ ಧನಞ್ಜಯ–ವೊಲೆಯಮ್ಮ-ದವಳೆಯ–ನರಸಿಗ-ಇಲ್ಲಿಂದಾಚೆ ಮುಂದಿನ ವಿವರಗಳು ದೊರೆಯುವುದಿಲ್ಲ. ಈ ವಂಶಾವಳಿಯಲ್ಲಿ ಚೋಳ ಧನಞ್ಜಯನು ಗಂಗ ಅರಸ ಶ್ರೀ ಪುರುಷನ ಸಮಕಾಲಿಕನಾಗಿದ್ದು ರಾಷ್ಟ್ರಕೂಟರ ವಿರುದ್ಧ ನಡೆದ ಯುದ್ಧದಲ್ಲಿ ಗಂಗರ ಪರವಾಗಿ 'ಪನ್ನಿರ್ವರ ದಂಡಿ'ನಲ್ಲಿ ಈತನೂ ಒಬ್ಬನಾಗಿದ್ದ. ಧನಞ್ಜಯನ ಕಾಲಕ್ಕೆ ನೊಳಂಬರು ಆಗ ತಾನೇ ಕಾಣಿಸಿಕೊಂಡಿದ್ದರು. ಹೀಗಾಗಿ ಈ ಪ್ರದೇಶಕ್ಕೆಲ್ಲಾ ಧನಞ್ಜಯನೇ ರಾಜನಾಗಿದ್ದ. ಈ ವಂಶವು ಪ್ರಾಚೀನವಾದುದಾಗಿದ್ದು ಇವರು ಆಳುತ್ತಿದ್ದ ರಾಜ್ಯವನ್ನು 'ಎರಿಗಲ್ವಾಡಿ' ಎಂದು ಶಾಸನದಲ್ಲಿ ಕರೆದಿದೆ. ನಿಡುಗಲ್ಲು ಇದರ ಕೇಂದ್ರ. ಈ ಶಾಸನದಲ್ಲಿ ಆ ಕಾಲಕ್ಕೆ ಚೋಳಿಕ ವಿಷಯ ಅಥವಾ ಎರಿಗಲ್ವಾಡಿಯಲ್ಲಿದ್ದ ತಿಮ್ಮಣಿ ಬಲ್ಲೂರು, ಚೋಳರಟ್ಟ ಗುಡಿ, ಪೇರೂರು, ಮುಂತಾದ

* ನಂ. ೭೨, ೧ನೆಯ ಅಡ್ಡರಸ್ತೆ, ಲಕ್ಕಸಂದ್ರ, ಬೆಂಗಳೂರು-೫೬೦ ೦೩೦

ಗ್ರಾಮಗಳೂ ಪೇರೂರನಾಟ್ಗಾಮುಣ್ಡ, ರಶೆಯ ಗವುಣ್ಡ, ಚೋಟಿಗವುಣ್ಡ, ಪ್ರಭುದೊಡ್ಡ, ಅಜ್ಜಪಜಿ ಮುಂತಾದ ವ್ಯಕ್ತಿಗಳ ಹೆಸರಿನ ಉಲ್ಲೇಖವಿದೆ. ದಾನದ ಸಾಕ್ಷಿಗೆ ಹದಿನೆಂಟು ಜನರನ್ನು ಹೆಸರಿಸಿದೆ. ದಾನದ ಗಡಿಗಳನ್ನು ತಿಳಿಸುವಾಗ ಪೂರ್ವಕ್ಕೆ–ಬಳಪದ ಕಲ್ಲು ಕೂಡುವಲ್ಲಿನ ದೊಣೆ, ಮತ್ತು ಕಡವಿನ ಪೊೞಿ, ತೆಂಕ–ದಪ್ಪುದೊೞಿ, ಪಶ್ಚಿಮಕ್ಕೆ–ಪೆಣ್ಣೆ, ನೈರುತಿಗೆ–ಮಂಜೀರದ ಪಳ್ಳ, ಬಡಗ ಆಶಗನಕೆೞಿ, ಸೇಗಲ್ಲಗುಡ್ಡೆ, ಗುಮಿೂಯ ಪಳ್ಳ, ಮದರಿಕೆೞಿಯತೊೞಿ ಈಶಾನಕ್ಕೆ ಸವಣಕಲರಕೆೞಿ ಎಂದಿದೆ.

ಈ ಪ್ರಾಚೀನ ಚೋಳರ ಬಗ್ಗೆ ಹೆಚ್ಚಿನ ಶಾಸನಗಳು ದೊರೆಯದಿರುವುದರಿಂದ ಹೆಚ್ಚಿನ ಇತಿಹಾಸ ಹೊರಬಂದಿರುವುದಿಲ್ಲ.

### ಶಾಸನ ಪಾಠ

ಸ್ವಸ್ತಿ ಚೋೞಿಕ ವಿಷಯ ದ್ರಿಡಾಮ್ಬರ ಮಹಾನಿ
ಯಶ ಖಡಸಶದರಯ ಮನಲಕ್ಕೆಯೊೞಿಯು
ರ ರಜದನಿ ಪರಸಲಬ್ದ ಜಯಲಕ್ಷ್ಮೀ ಜಯಪತಕ
ವಿರಜೀತ್ತ ಶ್ರೀಮರ್ ಚೋೞ್ನಾಡಿ ಬಣ್ಣನರ್ಕನನೆ[ಂ]ಬೊನ ಮಗ[ಂ]

ಕರಾಪಟ್ಟಿ ಕರಾಪಟ್ಟಿಯ ಮಗಂ ಪುನ್ನವಲ್ಲ ಪುನ್ನವಲ್ಲನ
ಮಗಂ ಸಿರಿರಾಮ ಸಿರಿರಾಮನ ಮಗಂ ಚೋಳ ದನಞ್ಜಯ
ಚೋೞ ದನಞ್ಜಯ ನಮಗಂ ಪೊಲೆಯಮ್ಮ ಪೊಲೆಯ
ಮ್ಮನ ಮಗಂ ದವಳೆಯ ದವಳೆಯನ ಮಗಂ ನರಸಿಗಂ

ಕಾಟಿಯಗಾವುಣ್ಡನು ಮದವಗಾವುಣ್ಡನು ಮುತ್ತರಾಜನು
ಪ್ರಜೆಮೆಣ್ಡಿಗಾವುಣ್ಡನು ತಿಮ್ಮಣಿಯ್ಯೊ ಕಟ್ಟಣೆಗಾಮುಣ್ಡ
ನು ಬಲ್ಲವ ಗಾಮುಣ್ಡನು ಜಯತುಗಂ ಗಾವುಣ್ಡನು ನಾಗ್ಸವು
ಣ್ಡನು ಬಲ್ಲೂರ ಚೋೞಗಾವುಣ್ಡನು ಚೋೞರಟ್ಟಗುಡಿಯು ಎಳವಕ್ಕ

ಗಾವುಣ್ಡನು ಕವಲಿಗಳು ಪೇರೂರ ನಾಟ್ಗಮುಣ್ಡನು ರಶೆಯಗವುಣ್ಡ
ನು ಚೋೞಗವುಣ್ಡನು ಗವುಣ್ಡದೊಡ್ಡನು ಕಮ್ಮೞಿಯ್ದೊ ಶ್ರೀರಮದೊ
ಡ್ಡರು ನಾಗೆಯದೊಡ್ಡನು ಪ್ರಭುದೊಡ್ಡನು ಅಜ್ಜಪಜಿನು ಇನ್ತಿ
ನಿಬೊರು ಅಟ(ದ)ರ ಪೊಲಾಮೇರೆಯ ನಡೆದು ಗುಡ್ಡೆ ಇಕ್ಕಿ ಸ್ಥಿತಿಯ ನಿೞಿ

ಸಿದೋರ್ ಇ(ದ)ಕ್ಕೆ ಅೞಿಪಿದೊಡೆ ಕೆೞಿಯು ಅರವೆಯುಮ್ಪುಸುವು ಪಾರ್ಮ್ವರ
ವಮ್ಬರಣಸಿಯುವನೞಿದೊರ್ ಅಡಗೆ.... ಅಂ ಸಿರಿಯಣನು ಮಾರದೆ
ೞಿಯನುದುಗ್ಗದೆೞಿಯನು ಅಣಿಜೀವದೆೞಿನು ಪೊನ್ನದೆೞಿನು
ಪೊಲೆಯಮ್ಮ ಎೞಿಯನು ಎನುಕಟ್ಬರ ಶಿಣ್ಣಮ್ಮ ಎೞಿಯನು....

ಚೋೞ ಮುತ್ತರಸರ ಕೊಟ್ಟದತ್ತಿ ಎರಿಗಲ್ವಾಡಿಯೊಳಗಣ
ದು ಕೊಳ್ಪುರಪ್ಪಡೆದತ ಕಬ್ಬಾರ್ವ್ವರ ಸುಕ್ಕೆಱೆಯ ಬ್ರಹ್ಮ
ದೇಯು ಪಡೆದೊ ಆಟರ ಪೊಲ ಮೇರೆ ಮೂಡ ಬಳಿಪ
ದ ಕಲ್ಲು ಕೂಡುತೆ ದೊಣೆಯು ಕಡವಿನಪೊೞೆಯು ತೆಂಕ್ಕ

ದಪ್ಪುದೊಱೆ ಪಡುವ ಪೆಣ್ಣೆಯು ನೈರತಿಯ ದೆಸೆಯದು
ಮಞ್ಜೀರದಪಳ್ಳವು ಬಡಗ ಆಶಗನಕೆಱೆಯುಂ ಸೇಗ್ಗ[ಂ]
ಲ್ಲ ಗುಡ್ಡೆಯು ಗುಮೊಯ ಪಳ್ಳಮು ಮದರಿಕೆಱೆಯ ತೊಱೆ
ಇಸ್ವನ ಸವಣಕಲರ ಕೆಱೆ ಇದಕ್ಕೆ ನಡದೊ[ಂ] ಅರಸರ

ಶ್ರೀ ಖರಣದ ಲೋಕಣನು ಶ್ರೀ ವೆಣ್ಡಯು ರೊಪ್ಪದ ಬೋವ
ಸರುಗನು ಸುಳಿವಳ್ಳನು ಪಡೆವಳ್ಳನು ರೊದ್ದೊಳ್ಳೊ ಚೋೞ
ಗವುಣ್ಡನು ಮರಿಯುಗವುಣ್ಡನು ಎರಿಗ್ಲ ಗವುಣ್ಡನು
ದೆಮ್ಬರ ಗವುಣ್ಡನು ಪರರ ದೇವಣನು ಕೋಡಿ ಕುನ್ದೆಯ್ಯೋ

ಮದವಱೆಯನು ಸಿಡುಕ ಪಱರ ಕಾಳಿಯನು ಪಣ್ಣಯನು ದೊಣಪಱರ
ನಾಕೋರನು ನಗದೇವನು ವಡ್ಡಪರರ ಅಜಱೆಯನು ಕ್ಷಕುಮ್ಬಱರ
ಮಂದವಱೆಯನು ಕೋಲ ಶ್ರೀ ಪಱರ ಭೆನೆಯದೆಱೆಯನು
ಎಮ್ಮೞಪಱರ ಕೋಮದೆಱೆಯನು ಪದಿನೆೞ್ಬ್ಬರ ಪಡೆದ ಚೋಱ
ಮಙ್ಗಳ ಅರಿಹರನ ಲಿಖಿತ ಮ[ಂ]ಗ್ಗಳಮಸಿರಿ.